# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 110 (255)

ಸದಸ್ಯರ ಹೆಸರು : ಡಾ||ತೇಜಸ್ವಿನಿ ಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸುವ ದಿನಾಂಕ : 13.12.2021

ಉತ್ತರಿಸುವವರು : ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ಅಭಯಾರಣ್ಯಗಳಲ್ಲಿ ಮಿತಿಮೀರಿ ಬೆಳೆದಿರುವ ಲಂಟಾನ (ಕಳೆ) ಬಗ್ಗೆ ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br>ರಾಜ್ಯದ ಕೆಲವು ಅಭಯಾರಣ್ಯಗಳಲ್ಲಿ ಲಂಟಾನ (ಕಳೆ)ಯು ಹೆಚ್ಚಾಗಿ ಕಂಡು ಬಂದಿರುತ್ತದೆ. |
| ಆ) | ಅರಣ್ಯದ ಎಷ್ಟು ಭಾಗವನ್ನು ಇದು ಆವರಿಸಿದೆ ಮತ್ತು ಇದರಿಂದ ವನ್ಯಜೀವಿಗಳಿಗೆ ಉಂಟಾಗಿರುವ ಆಹಾರದ ಕೊರತೆ ಪ್ರಮಾಣ ಎಷ್ಟು: | ರಾಜ್ಯದ ಅಭಯಾರಣ್ಯಗಳಲ್ಲಿ ಬೆಳೆದಿರುವ ಲಂಟಾನ ಕುರಿತು ನಿರ್ದಿಷ್ಟವಾಗಿ ಸರ್ವೇ ನಡೆಸಿ ಮ್ಯಾಪಿಂಗ್ ಕಾರ್ಯ ನಡೆಸಬೇಕಾಗಿರುತ್ತದೆ.<br><br>ಲಂಟಾನ ಮತ್ತು ಯುಪಟೋರಿಯಂ ಕಳೆಗಳಿಂದಾಗಿ ಹುಲ್ಲಿನ ಬೆಳವಣಿಗೆಗೆ ಅಡಚಣೆಯಾಗಿ ಅರಣ್ಯದಲ್ಲಿ ಹುಲ್ಲಿನ ಲಭ್ಯತೆ ಕಡಿಮೆಯಾಗಿರುವುದರಿಂದ ಸಸ್ಯಾಹಾರಿ ಪ್ರಾಣಿಗಳಿಗೆ ಅಲ್ಪ ಪ್ರಮಾಣದಲ್ಲಿ ಆಹಾರದ ಕೊರತೆ ಉಂಟಾಗಿದ್ದು, ಆದ್ಯತೆಯ ಮೇಲೆ ಲಂಟಾನ ಮತ್ತು ಯುಪಟೋರಿಯಂ ಕಳೆಗಳನ್ನು ತೆಗೆದು ಹಾಕಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಇ) | ಲಂಟಾನ ಮತ್ತು ಇತರೆ ಕಳೆ ಗಿಡಗಳನ್ನು ನಿರ್ಮೂಲನೆ ಮಾಡಲು ಬೃಹತ್ ಯೋಜನೆ ಇದೆಯೇ; | ರಾಜ್ಯದ ಸಂರಕ್ಷಿತ ಪ್ರದೇಶಗಳಲ್ಲಿ ಬೆಳೆದ ಲಂಟಾನ ಮತ್ತು ಇತರೆ ಕಳೆಗಿಡಗಳನ್ನು ತೆಗೆದು ಹುಲ್ಲುಗಾವಲನ್ನು ಬೆಳೆಸಲು ರಾಜ್ಯ ಸರಕಾರವು ಲಾಂಟಾನ ಮತ್ತು ಯುಪಟೋರಿಯಂ ಕಳೆಗಳ ನಿರ್ಮೂಲನೆ ಎಂಬ ಹೊಸ ಯೋಜನೆಯನ್ನು 2019-20ನೇ ಸಾಲಿನಿಂದ ಹಮ್ಮಿಕೊಂಡಿದೆ. |
| ಈ) | ವನ್ಯಜೀವಿಗಳಿಗೆ ಸಮೃದ್ಧ ಪೋಷಕಾಂಶ ಯುಕ್ತವಾದ ಆಹಾರಕ್ಕಾಗಿ ಯಾವ ಯಾವ ಹುಲ್ಲು ಗಿಡಮರಗಳನ್ನು ನೆಡಲಾಗಿದೆ; ಇದಕ್ಕಾಗಿ ಮೀಸಲಿಡಲಾಗಿರುವ ಹಣ ಎಷ್ಟು? | ಲಂಟಾನ ಮತ್ತು ಯುಪಟೋರಿಯಂ ಕಳೆಗಳ ನಿರ್ಮೂಲನೆ ಎಂಬ ಹೊಸ ಯೋಜನೆಯಡಿ ರಾಜ್ಯದ ಸಂರಕ್ಷಿತ ಪ್ರದೇಶಗಳಲ್ಲಿ ವನ್ಯಜೀವಿಗಳಿಗೆ ಆಹಾರ ಒದಗಿಸುವುದಕ್ಕಾಗಿ ಲಂಟಾನ ಹಾಗೂ ಇತರೆ ಕಳೆಗಳನ್ನು ತೆಗೆದು ಬಿದಿರು, ಹೆಮಟಾ ಮುಂತಾದ ಸ್ಥಳೀಯ ಪ್ರಭೇದದ ಹುಲ್ಲುಗಳನ್ನು ಬೆಳೆಸಲಾಗುತ್ತಿದೆ.<br>ಅಲ್ಲದೆ, ಲಂಟಾನ ಮತ್ತು ಯುಪಟೋರಿಯಂ ಕಳೆಗಳ ನಿರ್ಮೂಲನೆ ಎಂಬ ಹೊಸ ಯೋಜನೆಯಡಿ ಈ ಕಾರ್ಯಕ್ಕಾಗಿ 2021-22ನೇ ಸಾಲಿನಲ್ಲಿ ಒಟ್ಟು ರೂ.200.00 ಲಕ್ಷಗಳ ಅನುದಾನ ಕಲ್ಪಿಸಲಾಗಿದೆ. |

ಸಂಖ್ಯೆ: ಅಪಜೀ 218 ಎಫ್‌ಡಬ್ಲ್ಯೂಎಲ್ 2021

(ಉಮೇಶ್ ವಿ. ಕತ್ತಿ)
ಅರಣ್ಯ, ಆಹಾರ, ನಾಗರಿಕ ಸರಬರಾಜು
ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು